ಲಿಖಿತ ಮೂಲಕ ಉತ್ತರಿಸುವ



ಕರ್ನಾಟಕ ವಿಧಾನ ಪರಿಷತ್ತು
ನೂರ ನಲವತ್ತನೆಯ ಅಧಿವೇಶನ
ಬುಧವಾರ, ದಿನಾಂಕ : 04 ನೇ ಮಾರ್ಚ್, 2020

ಪರಿಶಿಷ್ಟ ಜಾತಿಯವರಿಗೆ ನೀಡಲಾಗುತ್ತಿರುವ ಸವಲತ್ತುಗಳ ಕುರಿತು

ಶ್ರೀ ಪ್ರದೀಪ್ ಶೆಟ್ಟರ್ (ಸ್ಥಳೀಯ ಸಂಸ್ಥೆಗಳಿಂದ ಚುನಾಯಿತರಾದವರು):-

208 (309) ಮಾನ್ಯ ಉಪ ಮುಖ್ಯಮಂತ್ರಿಗಳು ಹಾಗೂ (ಲೋಕೋಪಯೋಗಿ ಮತ್ತು ಸಮಾಜ ಕಲ್ಯಾಣ ಸಚಿವರು) ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ :-

(ಅ) ಡಾ|| ಅಂಬೇಡ್ಕರ್ ಅಭಿವೃದ್ಧಿ ನಿಗಮದಿಂದ ಪರಿಶಿಷ್ಟ ಜಾತಿಯ ಜನಾಂಗದವರಿಗೆ ನೀಡಲಾಗುತ್ತಿರುವ ಸವಲತ್ತುಗಳಾವುವು;

(ಆ) ನಿಗಮದ ಎಲ್ಲಾ ಯೋಜನೆಗಳ ಮಾಹಿತಿ ನೀಡುವುದು;

(ಇ) ಹುಬ್ಬಳ್ಳಿ-ಧಾರವಾಡ, ಗದಗ, ಹಾವೇರಿ ಜಿಲ್ಲೆಯಲ್ಲಿ ಡಾ|| ಅಂಬೇಡ್ಕರ್ ಅಭಿವೃದ್ಧಿ ನಿಗಮದಿಂದ ಸವಲತ್ತುಗಳನ್ನು ಪಡೆದಂತಹ ಫಲಾನುಭವಿಗಳ ಸಂಖ್ಯೆ ಎಷ್ಟು;

(ಈ) 2018-19ನೇ ಸಾಲಿನಲ್ಲಿ ಸದರಿ ನಿಗಮದಿಂದ ಸವಲತ್ತುಗಳನ್ನು ಪಡೆದಂತಹ ಫಲಾನುಭವಿಗಳ ಸಂಖ್ಯೆಯ ವಿವರವನ್ನು ಜಿಲ್ಲಾವಾರು ನೀಡುವುದು ?